

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 25-03-2021 ಪ್ರಶ್ನೆ ಸಂಖ್ಯೆ : 1822 (2183)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕವಟಗಿಮಠಮಹಾಂತೇಶ್ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 25-03-2021

ಉತ್ತರಿಸುವ ಸಚಿವರು: ಸಣ್ಣ ನೀರಾವರಿ ಸಚಿವರು

ವಿಷಯ : ರಾಜ್ಯದಲ್ಲಿ ಅಂತರ್ಜಲ ಮಟ್ಟ ಕುಸಿಯುತ್ತಿರುವ ಬಗ್ಗೆ

(ಅ) ರಾಜ್ಯದಲ್ಲಿ ನೂರಾರು ತಾಲ್ಲೂಕುಗಳಲ್ಲಿ ಅಂತರ್ಜಲ ಮಟ್ಟ ತೀರಾ ಕುಸಿಯುತ್ತಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಹಾಗಿದ್ದಲ್ಲಿ, ಅಂತರ್ಜಲ ಮಟ್ಟ ಹೆಚ್ಚಿಸುವ ನಿಟ್ಟಿನಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು ;

(ಇ) ರಾಜ್ಯದಲ್ಲಿ ಯಾವ ಯಾವ ತಾಲ್ಲೂಕುಗಳನ್ನು ಅತೀ ಹೆಚ್ಚು ಅಂತರ್ಜಲ ಬಳಕೆ ತಾಲ್ಲೂಕುಗಳೆಂದು ಗುರುತಿಸಲಾಗಿದೆ ; (ವಿವರ ಒದಗಿಸುವುದು)

(ಈ) ಅಂತರ್ಜಲ ವೃದ್ಧಿಸುವ ಮತ್ತು ನೀರಿನ ಮಿತ ಬಳಕೆ ಬಗ್ಗೆ ಸಾರ್ವಜನಿಕರಿಗೆ ಸೂಕ್ತ ಮಾರ್ಗದರ್ಶನ ಮತ್ತು ತಿಳುವಳಿಕೆ ನೀಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ;

(ಉ) ಜಲ ಮೂಲ ಪುನಃರ್ಜೀವನಗೊಳಿಸುವ ಅಂತರ್ಜಲ ನಿರ್ವಹಣೆಗೆ ಸರ್ಕಾರ ಅನುದಾನ ಒದಗಿಸಿದೆಯೇ ; ಹಾಗಿದ್ದಲ್ಲಿ ಕಳೆದ ಎರಡು ವರ್ಷಗಳಲ್ಲಿ ಒದಗಿಸಿದ ಅನುದಾನ ಎಷ್ಟು ; (ವಿವರ ನೀಡುವುದು)

(ಊ) ಹಂಚಿಕೆಯಾದ ಅನುದಾನದಲ್ಲಿ ಎಷ್ಟು ಅನುದಾನ ಬಳಕೆಯಾಗಿದೆ; ಉಳಿಕೆಯಾಗಿರುವ ಅನುದಾನವೆಷ್ಟು ? (ವಿವರ ನೀಡುವುದು)